# 'ಹನಿಕೋಂಬ್' ಪಠ್ಯಪುಸ್ತಕದಲ್ಲಿನ ವಿಷಯವಸ್ತುವಿನ ಸಂದರ್ಭೋಚಿತತೆಯ ವಿಶ್ಲೇಷಣೆ

ರವಿ ಪ್ರತಾಪ್ ಸಿಂಗ್

ಈ ಲೇಖನದಲ್ಲಿ, ನಾನು ಎನ್‌ಸಿಇಆರ್‌ಟಿ ಪ್ರಕಟಿಸಿರುವ ಹನಿಕೋಂಬ್ ಎಂಬ 7 ನೇ ತರಗತಿಯ ಇಂಗ್ಲಿಷ್ ಪಠ್ಯಪುಸ್ತಕವನ್ನು ವಿಶ್ಲೇಷಿಸುತ್ತಿದ್ದೇನೆ.

**ಔಪಚಾರಿಕ ಶಾಲಾ ಶಿಕ್ಷಣದಲ್ಲಿ ಪಠ್ಯಪುಸ್ತಕದ ಪಾತ್ರ**

ಔಪಚಾರಿಕ ಶಾಲಾ ಶಿಕ್ಷಣದಲ್ಲಿ ಪುಸ್ತಕಗಳು ಬಹಳ ನಿರ್ಣಾಯಕ ಪಾತ್ರವನ್ನು ಹೊಂದಿವೆ ಎಂಬ ಅಂಶವನ್ನು ಯಾರೂ ಅಲ್ಲಗಳೆಯಲಾಗುವುದಿಲ್ಲ. ಮತ್ತೊಂದೆಡೆ, ಜ್ಞಾನವು ಕೇವಲ ಪುಸ್ತಕಗಳಿಗೆ ಮಾತ್ರ ಸೀಮಿತವಾಗಿಲ್ಲ ಎಂಬುದೂ ನಿಜ. ಆದ್ದರಿಂದ ನಾವು ಸನ್ನಿವೇಶವನ್ನು ವಿಶ್ಲೇಷಿಸಬೇಕಾಗಿದೆ: ಯಾವ ಹಂತದಲ್ಲಿ ಪುಸ್ತಕಗಳು ಬೋಧನೆಯಲ್ಲಿ ಅತ್ಯಗತ್ಯ ಸಾಧನವಾಗುತ್ತವೆ ಮತ್ತು ಪಠ್ಯಪುಸ್ತಕದ ಸಹಾಯವಿಲ್ಲದೆ ಕಲಿಕಾರ್ಥಿಗಳು ಯಾವಾಗ ಕಲಿಯುತ್ತಾರೆ? ಆರಂಭಿಕ ಹಂತಗಳಲ್ಲಿ, ಮಗು ಹೇಗೆ ಓದುವುದು ಎಂಬುದನ್ನು ಕಲಿಯುತ್ತದೆ ಮತ್ತು ಒಮ್ಮೆ ಅವಳು/ಅವನು ಓದುವ ಸಾಮರ್ಥ್ಯವನ್ನು ಗಳಿಸಿಕೊಂಡ ಮೇಲೆ ಜೀವನದಲ್ಲಿ ಅವಳು/ಅವನು ವಿವಿಧ ವಿಷಯಗಳನ್ನು ಕಲಿಯಲು ಬೇರೆ ಬೇರೆ ಮೂಲಗಳಿಂದ ಓದುತ್ತಾಳೆ/ನೆ. ಇದು ಮಕ್ಕಳಿಗೆ ಓದುವ ಕೌಶಲದ ಮಹತ್ತ್ವವೇನು ಎಂಬುದನ್ನು ಮನದಟ್ಟು ಮಾಡಿಸುತ್ತದೆ. ಶಾಲೆಯಲ್ಲಿ ಕಲಿಕೆಯ ಆರಂಭಿಕ ಹಂತದಲ್ಲಿರುವ ಮಗುವನ್ನು ನಾವು ನೋಡಿದಾಗ, ಅವರಿಗೆ ಓದಲು ಸಹಾಯ ಮಾಡಲು ಉದ್ದೇಶಿತ ಭಾಷೆಯಲ್ಲಿ ಪುಸ್ತಕಗಳು ಇರುವುದನ್ನು ನಾವು ಕಂಡುಕೊಳ್ಳುತ್ತೇವೆ. ವಿವಿಧ ವಿಷಯಗಳನ್ನು ಕಲಿಯಲು ಮಾತೃಭಾಷೆ ಸಹಾಯ ಮಾಡುತ್ತದೆ ಎಂಬುದು ಸಾಬೀತಾಗಿದೆ. ಆದ್ದರಿಂದ ಬಹುತೇಕ ಶಿಕ್ಷಣತಜ್ಞರು ಉದ್ದೇಶಿತ ಭಾಷೆಯನ್ನು ಕಲಿಸಲು (ನಮ್ಮ ಸಂದರ್ಭದಲ್ಲಿ ಹಿಂದಿ ಮತ್ತು ಇಂಗ್ಲಿಷ್ ಎರಡೂ) ಮತ್ತು ಉದ್ದೇಶಿತ ಭಾಷೆಗಳನ್ನು ಬಲಪಡಿಸಲು ಮಾತೃಭಾಷೆಯನ್ನು (ನಮ್ಮ ವಿಷಯದಲ್ಲಿ, ಘರ್ವಾಲಿ) ಬಳಸಬೇಕೆಂದು ಹೇಳುತ್ತಾರೆ. ಇದರ ಬಗ್ಗೆ ನಾವು ಆಲೋಚಿಸಿದಾಗ ಮಾತೃಭಾಷೆಯು ವಿಷಯದೊಂದಿಗೆ ಸಂಪರ್ಕವನ್ನು ಬೆಸೆಯಲು ಸಹಾಯ ಮಾಡುತ್ತದೆ ಎಂಬುದು ಗೊತ್ತಾಗುತ್ತದೆ. ವಿಷಯವನ್ನು ಅರ್ಥಮಾಡಿಕೊಳ್ಳಲು ಈ ಸಂಪರ್ಕವು ಅತ್ಯಗತ್ಯ. ಇದರೊಂದಿಗೆ, ಕಲಿಯುವ ವಿಷಯವು ಕಲಿಕಾರ್ಥಿಗಳ ಸಂದರ್ಭಕ್ಕೆ ಸೂಕ್ತವಾಗಿದ್ದರೆ ಕಲಿಕೆಯು ದೀರ್ಘಕಾಲ ಉಳಿಯುತ್ತದೆ.

ಈ ಸನ್ನಿವೇಶವನ್ನು ನಾವು ಎರಡು ದೃಷ್ಟಿಕೋನಗಳಿಂದ ನೋಡಬಹುದು. ಮೊದಲನೆಯದು ನಾವು (ಸುಗಮಕಾರರು) ನಮ್ಮ ಶಾಲೆಗಳಲ್ಲಿ ಅಥವಾ ತರಗತಿಗಳಲ್ಲಿ ಬಳಸುವ ಪಠ್ಯಪುಸ್ತಕ ಮತ್ತು ಎರಡನೆಯದು ನಮ್ಮ ತರಗತಿಯಲ್ಲಿ ಬಳಸುವ ಬೋಧನಾ ವಿಧಾನ. ಮೊದಲನೆಯ ದೃಷ್ಟಿಕೋನದ ಮೇಲೆ ಗಮನ ಹರಿಸುತ್ತಾ ನಾವು ನಮ್ಮ ಪಠ್ಯಪುಸ್ತಕಗಳಲ್ಲಿನ ವಿಷಯವು ಸಂದರ್ಭೋಚಿತವಾಗಿದೆಯೇ ಮತ್ತು ನಮ್ಮ ಕಲಿಕಾರ್ಥಿಗಳಿಗೆ ಪ್ರಸ್ತುತವಾಗಿದೆಯೇ ಎಂಬುದನ್ನು ವಿಶ್ಲೇಷಿಸುತ್ತೇವೆ. ಎರಡನೆಯದಾಗಿ, ಮಕ್ಕಳ ಕಲಿಕೆಯಲ್ಲಿ

ಸಹಾಯಕವಾಗಬಹುದಾದ ಆಸಕ್ತಿದಾಯಕ ಚಟುವಟಿಕೆಗಳನ್ನು ಅನ್ವೇಷಿಸಲು ಇದು ಅವಕಾಶವನ್ನು ಒದಗಿಸುತ್ತದೆಯೇ? ಇದರರ್ಥಃ ಮಕ್ಕಳಿಗೆ ವಿನೋದದಿಂದ ಕಲಿಯಲು ಸಹಾಯ ಮಾಡುವ ರೀತಿಯಲ್ಲಿ ಅಭ್ಯಾಸಗಳನ್ನು ನೀಡಲಾಗಿದೆಯೇ? ಎರಡನೆಯ ದೃಷ್ಟಿಕೋನವು ಹೆಚ್ಚಾಗಿ ಶಿಕ್ಷಕರ ತಿಳಿವಳಿಕೆ ಮತ್ತು ಬೋಧನೆ ಕಲಿಕೆಯನ್ನು ಕುರಿತ ಅವರ ನಂಬಿಕೆಯ ವ್ಯವಸ್ಥೆ ಮತ್ತು ಉದ್ದೇಶಿತ ಭಾಷೆಯನ್ನು ಬಲಪಡಿಸುವ ನಿಟ್ಟಿನಲ್ಲಿ ಸ್ಥಳೀಯ ಭಾಷೆಯನ್ನು ಅವರು ಹೇಗೆ ಬಳಸುತ್ತಾರೆ ಎಂಬುದರ ಬಗ್ಗೆ ಇದೆ.

ಈ ಹಿನ್ನೆಲೆಯೊಂದಿಗೆ ನಾನು 7 ನೇ ತರಗತಿಗೆ ಇಂಗ್ಲಿಷ್ ಕಲಿಸುವಾಗಿನ ನನ್ನ ಅನುಭವವನ್ನು ಹಂಚಿಕೊಳ್ಳಲು ಬಯಸುತ್ತೇನೆ. ತಮಗೆಲ್ಲರಿಗೂ ತಿಳಿದಿರುವಂತೆ ನಾವು ಈಗ ನಮ್ಮ ಶಾಲೆಗಳಲ್ಲಿ ಎನ್‌ಸಿಇಆರ್‌ಟಿ ಪಠ್ಯ ಪುಸ್ತಕಗಳನ್ನು ಬಳಸುತ್ತಿದ್ದೇವೆ. 7 ನೇ ತರಗತಿಯ ಇಂಗ್ಲಿಷ್ ಪಠ್ಯಪುಸ್ತಕವನ್ನು ಹನಿಕೋಂಬ್ ಎಂದು ಹೆಸರಿಸಲಾಗಿದೆ.

ಪುಸ್ತಕದ ವಿಷಯದ ಸಂಕ್ಷಿಪ್ತ ಸಾರಾಂಶವನ್ನು ಕೆಳಗೆ ನೀಡಲಾಗಿದೆ.

| | | | | |
|---|---|---|---|---|
| ಘಟಕ 1 | ತ್ರೀ ಕ್ವೆಶ್ಚನ್ಸ್ (ಕಥೆ)<br><br>ದ ಸ್ಕ್ವಿರಿಲ್ (ಕವಿತೆ) | ಲಿಯೋ ಟಾಲ್ ಸ್ಟಾಯ್<br><br>ಮೈಲ್ಡ್ ರೆಡ್ ಬೋವರ್ಸ್ ಆರ್ಮ್ಸ್ಟ್ರಾಂಗ್ | ತ್ರೀ ಕ್ವೆಶ್ಚನ್ಸ್ ಎಂಬುದು ಟಾಲ್ ಸ್ಟಾಯ್ ಬರೆದಿರುವ ಕಥೆ | ಒಳ್ಳೆಯ ಕಥೆ ಮಕ್ಕಳನ್ನು ಆಲೋಚಿಸುವಂತೆ ಮಾಡುತ್ತದೆ. ಮತ್ತು ಕವಿತೆ ಕೂಡ ಚೆನ್ನಾಗಿದೆ. |
| ಘಟಕ 2 | ಎ ಗಿಫ್ಟ್ ಆಫ್ ಚಪ್ಪಲ್ಸ್<br><br>ದ ರೆಬೆಲ್ | ವಸಂತ ಸೂರ್ಯ<br><br>ಡಿ.ಜೆ.ಎನ್ರೈಟ್ | ಎ ಗಿಫ್ಟ್ ಆಫ್ ಚಪ್ಪಲ್ಸ್ ಎಂಬುದು ದಕ್ಷಿಣ ಭಾರತದ ಹಿನ್ನೆಲೆಯಿರುವ ಕಥೆ.<br><br>ದ ರೆಬೆಲ್ ಎಂಬುದು ಮಗುವಿನ ತುಂಟತನದ ಬಗೆಗಿನ ಕವಿತೆ | ಕಥೆಯ ಹಿನ್ನೆಲೆ ದಕ್ಷಿಣ ಭಾರತದ ಕುಟುಂಬವಾಗಿರುವುದರಿಂದ ಮಕ್ಕಳಿಗೆ ಅದನ್ನು ಕಲ್ಪಿಸಿಕೊಳ್ಳಲು ಕಷ್ಟವಾಯಿತು. |
| ಘಟಕ 3 | ಗೋಪಾಲ್ ಅಂಡ್ ದ ಹಿಲ್ಸಾ ಫಿಶ್ (ಹಾಸ್ಯ ಕಥೆ)<br><br>ದ ಶೆಡ್ (ಕವಿತೆ) | ಫ್ರಾಂಕ್ ಫ್ಲಿನ್ | ಗೋಪಾಲ್ ಅಂಡ್ ದ ಹಿಲ್ಸಾ ಫಿಶ್ ಎಂಬುದೊಂದು ಹಾಸ್ಯ ಕಥೆ.<br><br>ದ ಶೆಡ್ ಕವಿತೆಯು ಒಡಹುಟ್ಟಿದವರ ನಡುವಿನ ಮಾತುಕತೆಯನ್ನು ವಿವರಿಸುತ್ತದೆ. | ಗೋಪಾಲ್ ಅಂಡ್ ದ ಹಿಲ್ಸಾ ಫಿಶ್ ಒಂದು ಉತ್ತಮ ಹಾಸ್ಯ ಕಥೆ. |

| | | | | |
|---|---|---|---|---|
| ಘಟಕ 4 | ದಿ ಆಶಸ್ ದಟ್ ಮೇಡ್ ದ ಟ್ರೀಸ್ ಬ್ಲೂಮ್ (ಕಥೆ)<br><br>ಚಿವ್ವಿ (ಕವಿತೆ) | ವಿಲಿಯಮ್ ಎಲಿಯಟ್ ಗ್ರಿಫಿಟ್ಸ್<br><br>ಮೈಕೆಲ್ ರೋಸೆನ್ | ದಿ ಆಶಸ್ ದಟ್ ಮೇಡ್ ದ ಟ್ರೀಸ್ ಬ್ಲೂಮ್ ಒಂದು ಜಪಾನಿನ ಕಥೆ.<br><br>ಚಿವ್ವಿ ಎಂಬುದು ಮಕ್ಕಳಿಗಾಗಿ ಹಿರಿಯರು ನಡೆಸುವ ಮಾತುಕತೆ ಕುರಿತ ಕವಿತೆ | ಜಪಾನಿನ ಕಥೆಯು ಕೇಳಲು ಚೆನ್ನಾಗಿದೆ ಮತ್ತು ಮಾಂತ್ರಿಕತೆಯ ಪ್ರಜ್ಞೆಯೊಂದಿಗೆ ಆನಂದಿಸಬಹುದು. |
| ಘಟಕ 5 | ಕ್ವಾಲಿಟಿ (ಕಥೆ)<br><br>ಟ್ರೀಸ್ (ಕವಿತೆ) | ಜಾನ್ ಗಾಲ್ಸ್ ವರ್ದಿ<br><br>ಶೆರ್ಲಿ ಬಾವರ್ | ಕ್ವಾಲಿಟಿ ಎಂಬುದು ಲಂಡನ್ ನ ಹಿನ್ನೆಲೆಯಿರುವ ಕಥೆ.<br><br>ಟ್ರೀಸ್ ಕವಿತೆಯಲ್ಲಿ ಮರಗಳ ವಿವಿಧ ಉಪಯುಕ್ತತೆಯ ಬಗ್ಗೆ ತಿಳಿದುಕೊಳ್ಳುತ್ತೇವೆ. | ಕ್ವಾಲಿಟಿ ಉತ್ತಮ ಸಂದೇಶವನ್ನು ನೀಡುವ ಕಥೆಯಾಗಿದರೂ ಅದು ವಿದೇಶಿ ಹಿನ್ನೆಲೆಯನ್ನು ಹೊಂದಿದೆ. |
| ಘಟಕ 6 | ಎಕ್ಸ್ ಪರ್ಟ್ ಡಿಟೆಕ್ಟೀವ್ಸ್ (ಕಥೆ)<br><br>ಮಿಸ್ಟರಿ ಆಫ್ ದ ಟಾಕಿಂಗ್ ಫ್ಯಾನ್ (ಕವಿತೆ) | ಶಾರದಾ ದ್ವಿವೇದಿ<br><br>ಮಾಡ್ ರೂಬಿನ್ | ಎಕ್ಸ್ ಪರ್ಟ್ ಡಿಟೆಕ್ಟೀವ್ಸ್ ಎಂಬುದು ಒಂದು ಒಳ್ಳೆಯ ಕಥೆ | ಮಕ್ಕಳು ಕಥೆಯನ್ನು ಬಹಳ ಆನಂದಿಸಿದರು |
| ಘಟಕ 7 | ದಿ ಇನ್ವೆನ್ಶನ್ ಆಫ್ ವೀಟಾ ವಾಂಕ್ (ಕಥೆ)<br><br>ಡ್ಯಾಡ್ ಅಂಡ್ ದ ಕ್ಯಾಟ್ ಅಂಡ್ ದ ಟ್ರೀ | ರೋಲ್ಡ್ ಡ್ಹಾಲ್<br><br>ಕಿಟ್ ರೈಟ್ | ಇದೊಂದು ಕಾಲ್ಪನಿಕ ಕಥೆ<br><br>ಇದೊಂದು ಹಾಸ್ಯ ಕವಿತೆ | ಕಥೆ ಕಾಲ್ಪನಿಕವಾಗಿದೆ. ಆದಾಗ್ಯೂ ಕೆಲವು ಪದಗುಚ್ಛಗಳು ಹೆಚ್ಚಿನ ಮಟ್ಟದ ಕಠಿಣತೆಯನ್ನು ಹೊಂದಿವೆ.<br><br>ಕವಿತೆಯಲ್ಲಿ ಸಂದರ್ಭದ ಕೊರತೆ ಇದೆ. |
| ಘಟಕ 8 | ಫೈರ್: ಫ್ರೆಂಡ್ ಅಂಡ್ ಫೋ<br><br>ಮೇಡೋ ಸರ್ಪ್ರೈಸ್ | ಲೂಯಿಸ್ ಬ್ರಾಂಡ್ ಫಿಲಿಪ್ಸ್ | ಬೆಂಕಿಯ ದ್ವಂದ್ವ ಗುಣವನ್ನು ಚೆನ್ನಾಗಿ ಅರ್ಥಮಾಡಿಸುತ್ತದೆ.<br><br>ಕವಿತೆಯು ಹುಲ್ಲುಗಾವಲಿನ ವಿಸ್ಮಯವನ್ನು ಚಿತ್ರಿಸುತ್ತದೆ. | ಸಂದರ್ಭ ಅರ್ಥಪೂರ್ಣವಾಗಿದೆ |
| ಘಟಕ 9 | ಎ ಬೈಸಿಕಲ್ ಇನ್ ಗುಡ್ ರಿಪೇರ್ (ಕಥೆ)<br><br>ಗಾರ್ಡನ್ ಸ್ನೇಕ್ (ಕವಿತೆ) | ಜೆರೋಮ್ ಕೆ ಜೆರೋಮ್<br><br>ಮ್ಯೂರಿಯಲ್ ಎಲ್ ಸೊನಿ | ಒಂದು ಹಾಸ್ಯಭರಿತ ಕಥೆ | ಮಕ್ಕಳು ತಮ್ಮ ಜೀವನಕ್ಕೆ ಸಂಬಂಧ ಕಲ್ಪಿಸಿಕೊಳ್ಳಬಹುದು |

| | | | | |
|---|---|---|---|---|
| ಘಟಕ 10 | ದ ಸ್ಟೋರಿ ಆಫ್ ಕ್ರಿಕೆಟ್ | ರಾಮಚಂದ್ರ ಗುಹಾ | ಜ್ಞಾನಭರಿತ ಅಧ್ಯಾಯ | ಮಕ್ಕಳು ಸುಲಭವಾಗಿ ಸಂಬಂಧ ಕಲ್ಪಿಸಿಕೊಳ್ಳಬಹುದು ಆದರೆ ತುಂಬ ದೀರ್ಘವಾದ ಪಠ್ಯಗಳು ಮಕ್ಕಳಿಗೆ ಬೇಸರ ಉಂಟು ಮಾಡಬಹುದು. |

ಈಗ ಮೇಲಿನ ಅಧ್ಯಾಯಗಳ ಕುರಿತಾದ ಅನುಭವಗಳನ್ನು ನಾನು ಒಂದೊಂದಾಗಿ ಹಂಚಿಕೊಳ್ಳಲು ಪ್ರಯತ್ನಿಸುತ್ತೇನೆ:

**ಘಟಕ :1 ತ್ರೀ ಕ್ವೆಶ್ಚನ್ಸ್ (ಕಥೆ), ದ ಸ್ಕ್ವಿರಿಲ್ (ಕವಿತೆ)**

*ತ್ರೀ ಕ್ವೆಶ್ಚನ್ಸ್* (ಮೂರು ಪ್ರಶ್ನೆಗಳು) ಲಿಯೊ ಟಾಲ್‌ಸ್ಟಾಯ್ ಅವರು ಬರೆದಿರುವ ಒಂದು ತಾತ್ತ್ವಿಕ ಕಥೆ. ತರಗತಿಯಲ್ಲಿ ನಾನು ಮೂರನೇ ಪ್ರಶ್ನೆಯಾದ, ಅವರು ಮಾಡಬೇಕಾದ ಪ್ರಮುಖ ಕೆಲಸ ಯಾವುದು? ಎಂದು ಕೇಳಿದಾಗ, ಮಕ್ಕಳ ಪ್ರತಿಕ್ರಿಯೆಯು - ಓದು, ಆಟ, ಇತ್ಯಾದಿ ಎಂದಾಗಿತ್ತು. ಕಥೆ ಮುಂದುವರಿಯುತ್ತಿದ್ದಂತೆ, ಸಂನ್ಯಾಸಿಯು ಕೇಳಿದ ಈ ಪ್ರಶ್ನೆಗಳಿಗೆ ಉತ್ತರಗಳನ್ನು ತಿಳಿದುಕೊಳ್ಳಲು ಅವರೆಲ್ಲರೂ ಉತ್ಸುಕರಾಗಿದ್ದರು. ಆದರೆ ಕಥೆಯ ಕೊನೆಯಲ್ಲಿ ಸಂನ್ಯಾಸಿಯು ಕೊಟ್ಟ ಉತ್ತರಗಳನ್ನು ಕೇಳಿ ಅವರೆಲ್ಲರಿಗೂ ಆಶ್ಚರ್ಯವಾಯಿತು. ಆಗ ನಾನು ಅವರಿಗೆ ಕಥೆಯ ಕೊನೆಯ ಭಾಗವನ್ನು ಮತ್ತೊಮ್ಮೆ ಓದಲು ಹೇಳಿದೆ. ಆಗ ಕೆಲವರಿಗೆ ತಕ್ಕಮಟ್ಟಿಗೆ ಅರ್ಥವಾಯಿತು. ಇದು ಟಾಲ್‌ಸ್ಟಾಯ್ ಅವರ ಕಥೆಯಾಗಿರುವುದರಿಂದ, ಕಥಾವಸ್ತುವಿನ ಅರ್ಥವನ್ನು ಅರಿಯುವುದು ಅಷ್ಟು ಸುಲಭವಲ್ಲ ಎಂಬುದು ತಿಳಿದಿದೆ. ಈ ಅಧ್ಯಾಯವು ನನಗೇ ಸ್ವಲ್ಪ ಕಷ್ಟವೆನಿಸಿತು.

ದ ಸ್ಕ್ವಿರಿಲ್ (ಅಳಿಲು) ಒಂದು ಚಿಕ್ಕ ಕವಿತೆ. ಮಕ್ಕಳಿಗೆ ಅಳಿಲುಗಳು ಪರಿಚಿತವಾಗಿರುತ್ತವೆ. ಅಳಿಲುಗಳು ತುಂಬ ನಾಚಿಕೆಪಡುತ್ತವೆ ಮತ್ತು ಯಾರಾದರೂ ಗಮನಿಸಿದಾಗ ಬೇಗನೆ ಓಡಿಹೋಗುತ್ತವೆ ಎಂದು ತಮ್ಮ ಅನುಭವಗಳನ್ನು ಹೇಳಿಕೊಳ್ಳಲು ಕಾತರರಾಗಿತ್ತಾರೆ. ಕವಿತೆಯ ವಿಷಯವು ಮಕ್ಕಳ ಜೀವನದ ಸನ್ನಿವೇಶದೊಂದಿಗೆ ಸಂಬಂಧ ಹೊಂದಿದೆ. ಹೀಗಾಗಿ ಈ ಕವಿತೆಯು ಅವರಿಗೆ ಸುಲಭವಾಗಿ ಅರ್ಥವಾಯಿತು.

**ಘಟಕ: 2 ಎ ಗಿಫ್ಟ್ ಆಫ್ ಚಪ್ಪಲ್ಸ್ (ಕಥೆ), ದ ರೆಬೆಲ್ (ಕವಿತೆ)**

ಎ ಗಿಫ್ಟ್ ಆಫ್ ಚಪ್ಪಲ್ಸ್ ದಕ್ಷಿಣ ಭಾರತದ ಹಿನ್ನೆಲೆಯುಳ್ಳ ಕಥೆಯಾಗಿದೆ. ಕಥೆಯು ದೀರ್ಘವಾಗಿತ್ತು ಮತ್ತು ಮಕ್ಕಳಿಗೆ ಪಠ್ಯದೊಂದಿಗೆ ಸಂಬಂಧ ಬೆಸೆದುಕೊಳ್ಳಲು ಕಷ್ಟವಾಯಿತು. ಅಭ್ಯಾಸಗಳು ಉತ್ತಮವಾಗಿವೆ. ಅದರಲ್ಲೂ ಮಾತನಾಡುವ ಮತ್ತು ಬರೆಯುವ ಭಾಗಗಳು ಬಹಳ ಉಪಯುಕ್ತವಾಗಿವೆ. ದ ರೆಬೆಲ್ ಒಂದು ಕುತೂಹಲಕಾರಿ ಕವಿತೆ. ನಮ್ಮ ತರಗತಿಯಲ್ಲಿ ಒಂದಕ್ಕಿಂತ ಹೆಚ್ಚು ರೆಬಲ್ ಗಳು ಇದ್ದಾರೆ ಎಂದು ಮಕ್ಕಳು ಹೇಳಿದರು!

**ಘಟಕ :3 ಗೋಪಾಲ್ ಅಂಡ್ ದ ಹಿಲ್ಸಾ ಫಿಶ್ (ಹಾಸ್ಯ ಕಥೆ), ಶೆಡ್ (ಕವಿತೆ)**

ಬೀರಬಲ್ ಮತ್ತು ತೆನಾಲಿರಾಮರನ್ನು ಹೋಲುವ ಪಾತ್ರದಲ್ಲಿ ಗೋಪಾಲ್ ಪಾತ್ರವು ಕಾಣಿಸಿದ್ದರಿಂದ ಮಕ್ಕಳು ಈ ಹಾಸ್ಯ ಕಥೆಯನ್ನು ಆನಂದಿಸಿದರು. ಮಕ್ಕಳು ಕಥೆಯ ಪಾತ್ರಾಭಿನಯವನ್ನು ಆನಂದಿಸಿದರು. ದ ಶೆಡ್ ಅನ್ನು ಅರ್ಥಮಾಡಿಕೊಳ್ಳುವುದು ಮಕ್ಕಳಿಗೆ ಸುಲಭವಾಗಿತ್ತು. ಏಕೆಂದರೆ ಅವರು ತಮ್ಮ ಹಳ್ಳಿಗಳಲ್ಲಿ ಅವುಗಳನ್ನು ನೋಡಿ ಅದರ ಬಗ್ಗೆ ತಿಳಿದುಕೊಂಡಿದ್ದರು. ಅಧ್ಯಾಯದ ಕೊನೆಯಲ್ಲಿ ನೀಡಲಾದ ಅಭ್ಯಾಸಗಳು ತಮ್ಮ ಪ್ರದೇಶದಲ್ಲಿ ಪರಿಚಿತವಿರುವ ಹೆದರಿಕೆ ಹುಟ್ಟಿಸುವ ಸ್ಥಳಗಳ ಬಗ್ಗೆ ಮಾತನಾಡಲು ಮಕ್ಕಳಿಗೆ ಅವಕಾಶವನ್ನು ನೀಡುತ್ತದೆ.

**ಘಟಕ :4 ದಿ ಆಶಸ್ ದಟ್ ಮೇಡ್ ಟ್ರೀಸ್ ಬ್ಲೂಮ್ (ಜಪಾನೀಸ್ ಕಥೆ), ಚಿವ್ವಿ (ಕವಿತೆ)**

*ದಿ ಆಶಸ್ ದಟ್ ಮೇಡ್ ಟ್ರೀಸ್ ಬ್ಲೂಮ್* ಒಂದು ಜಪಾನಿನ ಕಥೆ. ಇದು ಒಂದು ಮಾಂತ್ರಿಕ ಶಕ್ತಿಯನ್ನು ಹೊಂದಿದೆ ಮತ್ತು ಮಕ್ಕಳಿಗೆ ಬೇಗ ಅರ್ಥವಾಗುತ್ತದೆ. ಹೆಚ್ಚಿನ ಮಕ್ಕಳಿಗೆ ಹಿರಿಯರು ತಮ್ಮೊಂದಿಗೆ ಈ ರೀತಿಯ ಮಾತುಗಳನ್ನಾಡುವುದರಿಂದ ಚಿವ್ವಿ ಕವಿತೆಯೊಂದಿಗೆ ಸಂಬಂಧ ಕಲ್ಪಿಸುವುದು ಸುಲಭವಾಗುತ್ತದೆ.

**ಘಟಕ :5 ಕ್ವಾಲಿಟಿ (ಕಥೆ), ಟ್ರೀಸ್ (ಕವಿತೆ)**

*ಕ್ವಾಲಿಟಿ ಕಥೆ*ಯ ಹಿನ್ನೆಲೆ ಲಂಡನ್ ಆಗಿದೆ. ಇದು ಜರ್ಮನಿಯಲ್ಲಿ ಹುಟ್ಟಿ ಲಂಡನ್‌ನಲ್ಲಿ ನೆಲೆಸಿರುವ ಇಬ್ಬರು ಸಹೋದರರ ಕಥೆ. ಕಥೆಯಲ್ಲಿನ ಸಂದೇಶವು ಚೆನ್ನಾಗಿದೆ. ಆದರೆ ಚಮ್ಮಾರರಿಂದ ಬೂಟುಗಳನ್ನು ಖರೀದಿಸುವ ವಿಷಯವನ್ನು ಅರ್ಥಮಾಡಿಕೊಳ್ಳಲು ಮಕ್ಕಳಿಗೆ ಕಷ್ಟವಾಯಿತು. ಏಕೆಂದರೆ ಅವರು ಯಾವಾಗಲೂ ಅಂಗಡಿಯಿಂದ ಮಾತ್ರ ಶೂಗಳನ್ನು ಖರೀದಿಸುತ್ತಿದ್ದರು.

ಮಕ್ಕಳಿಗೆ ಮರಗಳ ಜೊತೆ ಸಂಬಂಧ ಇರುವುದರಿಂದ *ಟ್ರೀಸ್* ಅನ್ನು ಅರ್ಥಮಾಡಿಕೊಳ್ಳುವುದು ಸುಲಭ. ಅಧ್ಯಾಯದ ಕೊನೆಯಲ್ಲಿ ನೀಡಲಾದ ಅಭ್ಯಾಸಗಳು, ವಿಶೇಷವಾಗಿ ನೀರು ಮತ್ತು ಗಾಳಿಯ ಮೇಲೆ ಕವಿತೆಗಳನ್ನು ಬರೆಯುವ ಅಭ್ಯಾಸಗಳು ಆಸಕ್ತಿದಾಯಕವಾಗಿವೆ.

**ಘಟಕ :6 ಎಕ್ಸ್ ಪರ್ಟ್ ಡಿಟೆಕ್ಟೀವ್ಸ್ (ಕಥೆ), ಮಿಸ್ಟರಿ ಆಫ್ ದ ಟಾಕಿಂಗ್ ಫ್ಯಾನ್ (ಕವಿತೆ)**

ಎಕ್ಸ್‌ಪರ್ಟ್ ಡಿಟೆಕ್ಟಿವ್ಸ್ ಎಂಬುದು ಒಂದು ಭಾರತೀಯ ಕಥೆಯಾಗಿದೆ. ಇದರಲ್ಲಿ ಅಣ್ಣ ತಂಗಿಯರಿಬ್ಬರು ಒಬ್ಬ ವ್ಯಕ್ತಿಯ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಲು ಪ್ರಯತ್ನಿಸುತ್ತಿರುತ್ತಾರೆ. ಅವರು ಆತನ ಬಗ್ಗೆ ಕೆಲವು ಅನುಮಾನಾಸ್ಪದವಾದ ಮಾಹಿತಿಯನ್ನು ಕಂಡುಹಿಡಿಯುತ್ತಾರೆ. ಕಥೆಯನ್ನು ಓದುವಾಗ, ಕಥೆಯ ಕೊನೆಯಲ್ಲಿ ಕ್ಲೈಮಾಕ್ಸ್ ಇರುತ್ತದೆ ಎಂದು ಮಕ್ಕಳು ತಿಳಿದಿದ್ದರು. ಆದರೆ ಅಂತ್ಯವು ಮುಕ್ತವಾಗಿತ್ತು. ಇದರಿಂದಾಗಿ ಮಕ್ಕಳು ತಮ್ಮದೇ ಆದ ವಿಭಿನ್ನವಾದ ಅಭಿಪ್ರಾಯಗಳನ್ನು ಹೇಳಲು ಸಾಧ್ಯವಾಯಿತು.

ಮಕ್ಕಳಿಗೆ ಸದ್ದು ಮಾಡುವ ಫ್ಯಾನ್ ಗಳ ಬಗ್ಗೆ ತಿಳಿದಿರುವುದರಿದ *ಮಿಸ್ಟರಿ ಆಫ್ ದಿ ಟಾಕಿಂಗ್ ಫ್ಯಾನ್* ಕವಿತೆ ಸುಲಭವಾಗಿ ಅರ್ಥವಾಯಿತು. ಸರಿಯಾಗಿ ಎಣ್ಣೆ ಹಾಕದಿದ್ದರೆ ಸೈಕಲ್‌ಗಳೂ ಸಹ ಸದ್ದು ಮಾಡುತ್ತವೆ ಎಂಬ ವಿಚಾರವನ್ನೂ ಹಂಚಿಕೊಂಡರು.

**ಘಟಕ: 7 ದಿ ಇನ್ವೆನ್ಶನ್ ಆಫ್ ವೀಟಾ-ವೊಂಕ್ (ಫ್ಯಾಂಟಸಿ), ಡ್ಯಾಡ್ ಅಂಡ್ ದ ಕ್ಯಾಟ್ ಅಂಡ್ ದ ಟ್ರೀ (ಕವಿತೆ)**

*ದಿ ಇನ್ವೆನ್ಶನ್ ಆಫ್ ವೀಟಾ-ವೊಂಕ್* ಒಂದು ಫ್ಯಾಂಟಸಿ ಕಥೆಯಾಗಿದ್ದು, ಪಠ್ಯದಲ್ಲಿ ಬಳಸಲಾಗಿರುವ ಪದಗಳು ಬಹು ಕಠಿಣವಾಗಿವೆ. ಕಥೆಯ ವಸ್ತುವಿಷಯವು ಆಸಕ್ತಿದಾಯಕವಾಗಿದ್ದರೂ ಸಹ ಅದರ ಹಿನ್ನೆಲೆಯೊಂದಿಗೆ ಸಂಬಂಧ ಕಲ್ಪಿಸಿಕೊಳ್ಳುವುದು ಮಕ್ಕಳಿಗೆ ಕಷ್ಟಕರವಾಗಿತ್ತು. ಅಧ್ಯಾಯದ ಕೊನೆಯಲ್ಲಿ ನೀಡಲಾದ ಅಭ್ಯಾಸಗಳು ಸ್ಥಳೀಯ ಭಾಷೆಯನ್ನು ಬಳಸಲು ಅವಕಾಶಗಳನ್ನು ನೀಡುತ್ತವೆ.

*ಡ್ಯಾಡ್ ಅಂಡ್ ದ ಕ್ಯಾಟ್ ಅಂಡ್ ದ ಟ್ರೀ* ಒಂದು ಕವಿತೆಯಾಗಿದ್ದು, ಇದರಲ್ಲಿ ತಂದೆಯೊಬ್ಬರು ಬೆಕ್ಕನ್ನು ಮರದಿಂದ ಕೆಳಗೆ ತರಲು ಪ್ರಯತ್ನಿಸುತ್ತಿದ್ದಾರೆ. ಆದರೆ, ನಮ್ಮ ಗ್ರಾಮೀಣ ಪರಿಸ್ಥಿತಿಗೆ ಈ ಕವಿತೆಯ ಸನ್ನಿವೇಶವನ್ನು ಅರ್ಥಮಾಡಿಕೊಳ್ಳಲು ಆಗಲಿಲ್ಲ.

**ಘಟಕ: 8 ಫೈರ್ :ಫ್ರೆಂಡ್ ಅಂಡ್ ಫೋ (ಮಾಹಿತಿಯುಕ್ತ), ಮೇಡೋ ಸರ್ಪ್ರೈಸ್ (ಕವಿತೆ)**

*ಫೈರ್ :ಫ್ರೆಂಡ್ ಅಂಡ್ ಫೋ* ಕವಿತೆಯು ಬೆಂಕಿ ಹತ್ತಿಕೊಳ್ಳುವ ಕಾರಣಗಳು ಮತ್ತು ಅದನ್ನು ನಂದಿಸುವ ವಿಧಾನಗಳನ್ನು ವಿವರಿಸುವುದರಿಂದ ಮಾಹಿತಿಯುಕ್ತವಾದುದು ಎನ್ನಬಹುದು. ಮಕ್ಕಳು ಬೆಂಕಿಯ ಅಪಾಯಗಳನ್ನು ಅರ್ಥಮಾಡಿಕೊಳ್ಳುತ್ತಾರೆ ಮತ್ತು ವಿಷಯದೊಂದಿಗೆ ಸಂಬಂಧ ಬೆಸೆಯಲು ಸುಲಭವಾಗುತ್ತದೆ. ಮೇ*ಡೋ ಸರ್ಪ್ರೈಸ್* ಎಂಬ ಕವಿತೆ ಅರ್ಥಮಾಡಿಕೊಳ್ಳಲು ಸುಲಭವಾಗಿದೆ.

ಕೆಳಗಿನ ಪಾಠಗಳನ್ನು ನಾವು ಇನ್ನೂ ಪೂರ್ಣಗೊಳಿಸಬೇಕಾಗಿದೆ:

**ಘಟಕ :9 ಎ ಬೈಸಿಕಲ್ ಇನ್ ಎ ಗುಡ್ ರಿಪೇರ್ (ಕಥೆ) ಗಾರ್ಡನ್ ಸ್ನೇಕ್ (ಕವಿತೆ)**

*ಎ ಬೈಸಿಕಲ್ ಇನ್ ಎ ಗುಡ್ ರಿಪೇರ್* ಒಂದು ಹಾಸ್ಯಮಯ ಕಥೆಯಾಗಿದೆ ಮತ್ತು ಮಕ್ಕಳಿಗೆ ಬೈಸಿಕಲ್‌ಗಳ ಬಗ್ಗೆ ಗೊತ್ತಿರುವುದರಿಂದ ಅದನ್ನು ಅರ್ಥಮಾಡಿಕೊಳ್ಳಲು ಸುಲಭವಾಗುತ್ತದೆ.

ಗಾರ್ಡನ್ ಸ್ನೇಕ್ ಎನ್ನುವುದು ಹೆಚ್ಚಿನ ಹಾವುಗಳು ಮನುಷ್ಯರಿಗೆ ಹಾನಿಕಾರಕವಲ್ಲ ಎಂದು ಹೇಳುವ ಕವಿತೆಯಾಗಿದೆ. ಬಹುತೇಕ ಮಕ್ಕಳು ಹಾವುಗಳನ್ನು ನೋಡಿರುವುದರಿಂದ ಅವುಗಳ ಬಗ್ಗೆ ಪರಿಚಿತರಾಗಿರುತ್ತಾರೆ. ಇದು ಕವಿತೆಯ ವಿಷಯವನ್ನು ಅರ್ಥಮಾಡಿಕೊಳ್ಳಲು ಅವರಿಗೆ ಸಹಾಯ ಮಾಡುತ್ತದೆ.

**ಘಟಕ:10** *ದ ಸ್ಟೋರಿ ಆಫ್ ಕ್ರಿಕೆಟ್,* ಇದು ಕ್ರಿಕೆಟ್ ಇತಿಹಾಸದ ಬಗೆಗಿನ ಕಥೆಯನ್ನು ಹೇಳುತ್ತದೆ. ಮಕ್ಕಳಿಗೆ ಕ್ರಿಕೆಟ್ ನೆಚ್ಚಿನ ವಿಷಯವಾದ್ದರಿಂದ ಅದರ ಬಗ್ಗೆ ಓದಲು ಇಷ್ಟಪಡುವರಾದರೂ, ಪಠ್ಯವು ತುಂಬ ದೀರ್ಘವಾಗಿರುವುದರಿಂದ ಮಕ್ಕಳಿಗೆ ಬೇಸರವಾಗಬಹುದು.

ಇರುವ ಹತ್ತು ಘಟಕಗಳ ಪೈಕಿ ಐದು ಘಟಕಗಳನ್ನು ತರಗತಿಯಲ್ಲಿ ಪಾಠ ಮಾಡುವಾಗ ನನಗೆ ಕಷ್ಟವಾಯಿತು. ಇದಕ್ಕೆ ಸಂದರ್ಭೋಚಿತವಲ್ಲದ ವಿಷಯ, ಸುದೀರ್ಘ ಪಠ್ಯ ಮತ್ತು ಸಂಕೀರ್ಣ ಶಬ್ದಗಳೇ ಪ್ರಮುಖ ಕಾರಣಗಳು.

ಈ ಕೆಳಗಿನ ಕೋಷ್ಟಕದಲ್ಲಿ ಲೇಖಕರ ಹೆಸರು ಮತ್ತು ಕಿರು ಪರಿಚಯವನ್ನು ನೀಡಲಾಗಿದೆ

| ಲೇಖಕರ ಹೆಸರು | ಕಿರು ಪರಿಚಯ |
|---|---|
| ವಸಂತ ಸೂರ್ಯ | ಹುಟ್ಟಿದ್ದು ತಮಿಳುನಾಡಿನಲ್ಲಿ. ಜೊತೆಗೆ ತಮಿಳು ಚಿತ್ರೋದ್ಯಮದಲ್ಲಿ ಸಹ ನಿರ್ದೇಶಕ ಹಾಗೂ ನಟನಾಗಿ ಕೆಲಸ ಮಾಡಿದ್ದಾರೆ. |
| ಮಿಲ್ಡ್ರೆಡ್ ಬೊವರ್ಸ್ ಆರ್ಮ್ಸ್ಟ್ರಾಂಗ್ | ಹುಟ್ಟಿದ್ದು ಅಮೆರಿಕದ ನ್ಯೂಯಾರ್ಕ್ ನಲ್ಲಿ, ಕಾರ್ಬನ್ ವಿಜ್ಞಾನದ ರಾಣಿ ಎಂದೂ ಪ್ರಖ್ಯಾತಿ. |
| ಫ್ರ್ಯಾಂಕ್ ಫ್ಲಿನ್ | ಹುಟ್ಟಿದ್ದು ಸಿಡ್ನಿಯಲ್ಲಿ, ವೃತ್ತಿಯಲ್ಲಿ ವೈದ್ಯರು. |
| ವಿಲಿಯಮ್ ಎಲಿಯಟ್ ಗ್ರಿಫಿಸ್ | ಹುಟ್ಟಿದ್ದು ಅಮೆರಿಕದ ಪೆನ್ಸಿಲ್ವೇನಿಯಾದ ಫಿಲಡೆಲ್ಫಿಯಾದಲ್ಲಿ, ಶಿಕ್ಷಣತಜ್ಞ. |
| ಮೈಕೇಲ್ ರೋಸೆನ್ | ಹುಟ್ಟಿದ್ದು ಲಂಡನ್ ನಲ್ಲಿ, ಮಕ್ಕಳ ಕಾದಂಬರಿಕಾರ. |
| ಜಾನ್ ಗಾಲ್ಸ್ ವರ್ದಿ | ಹುಟ್ಟಿದ್ದು ಇಂಗ್ಲೆಂಡ್ ನಲ್ಲಿ, ಲೇಖಕ. |
| ಶೆರ್ಲಿ ಬಾವರ್ | ಹುಟ್ಟಿದ್ದು ನ್ಯೂಯಾರ್ಕ್ ನಲ್ಲಿ, ಲೇಖಕ. |
| ಶಾರದಾ ದ್ವಿವೇದಿ | ಹುಟ್ಟಿದ್ದು ಮುಂಬೈನಲ್ಲಿ, ಲೇಖಕಿ. |
| ಮಾಡ್ ರೂಬಿನ್ | ಹುಟ್ಟಿದ್ದು ಅಮೆರಿಕದ ಕೊಲರಾಡೋದಲ್ಲಿ, ಲೇಖಕ. |
| ಕಿಟ್ ರೈಟ್ | ಹುಟ್ಟಿದ್ದು ಯುಕೆಯ ಕ್ರಾಕಂ ಹಿಲ್ ನಲ್ಲಿ, ಲೇಖಕ. |
| ರೋಹಾಲ್ಡ್ ಡ್ಹಾಲ್ | ಹುಟ್ಟಿದ್ದು ಯುಕೆಯ ಕಾರ್ಡಿಫ್ ನಲ್ಲಿ, ಲೇಖಕ. |
| ಲೂಯಿ ಬ್ರಾಂಡ್ ಫಿಲಿಪ್ಸ್ | ಹುಟ್ಟಿದ್ದು ಅಮೆರಿಕದ ಮ್ಯಾಸಾಚುಸೆಟ್ಸ್ ನ ಲೊವೆಲ್ ನಲ್ಲಿ, ಲೇಖಕ. |
| ಜೆರೋಮ್ ಕೆ ಜೆರೋಮ್ | ಹುಟ್ಟಿದ್ದು ಇಂಗ್ಲೆಂಡ್ ನ ವಾಲ್ಸಾಲ್ ನ ಕಾಲ್ಡ್ ಮೋರ್ ನಲ್ಲಿ, ಲೇಖಕ, |

| | |
|---|---|
| ಮ್ಯೂರಿಯಲ್ ಎಲ್  ಸೊನಿ | ಹುಟ್ಟಿದ್ದು ಕೆನಡಾದಲ್ಲಿ, ಲೇಖಕ. |
| ರಾಮಚಂದ್ರ ಗುಹಾ | ಹುಟ್ಟಿದ್ದು ಡೆಹ್ರಾಡೂನ್ ನಲ್ಲಿ, ಲೇಖಕ. |

ಮೇಲೆ ತಿಳಿಸಿದ ಕೋಷ್ಟಕವನ್ನು ಗಮನಿಸಿದಾಗ ಹದಿನೈದು ಬರಹಗಾರರ ಪೈಕಿ ಕೇವಲ ಮೂವರು ಮಾತ್ರ ಭಾರತೀಯ ಲೇಖಕರಿದ್ದಾರೆ ಎಂಬುದು ಕಂಡುಬರುತ್ತದೆ: ಒಬ್ಬರು ತಮಿಳುನಾಡಿನವರು, ಒಬ್ಬರು ಮುಂಬೈನವರು ಮತ್ತು ಒಬ್ಬರು ಡೆಹ್ರಾಡೂನ್ ನವರು.

ಈ ಲೇಖನದ ಮೊದಲ ಭಾಗದಲ್ಲಿ ಉಲ್ಲೇಖಿಸಲಾದ ಕೆಲವು ಅವಲೋಕನಗಳನ್ನು ಆಧಾರವಾಗಿ ಇಟ್ಟುಕೊಂಡು ನಾನು ಹನಿಕೋಂಬ್ ಅನ್ನು ನೋಡಿದಾಗ, ಈ ಕೆಳಗಿನವುಗಳನ್ನು ಕಂಡುಕೊಂಡಿದ್ದೇನೆ:

- ಪುಸ್ತಕದಲ್ಲಿ ಸಂದರ್ಭೋಚಿತ ವಿಷಯದ ಕೊರತೆ ಕಾಣುತ್ತದೆ. ನಾವು ಗ್ರಾಮೀಣ ಹಿನ್ನೆಲೆಯ ಶಾಲೆಗಳಲ್ಲಿ ಪುಸ್ತಕವನ್ನು ಬಳಸುತ್ತಿರುವಾಗ ಇದರ ಪರಿಣಾಮ ಇನ್ನೂ ಹೆಚ್ಚಾಗಿ ಕಾಣಿಸುತ್ತದೆ. ಆದಾಗ್ಯೂ ಇದನ್ನು ಹೊಸ ಕಲಿಕೆಗೆ ಒಡ್ಡಿಕೊಳ್ಳಲು ಒದಗಿರುವ ಒಂದು ಅವಕಾಶವೆಂದು  ಕಾಣಬಹುದಾಗಿದೆ.

- ಪುಸ್ತಕವು ಶಿಕ್ಷಕರಿಗಾಗಿ ಟಿಪ್ಪಣಿಗಳು ಎಂಬ ಉತ್ತಮ ವಿಭಾಗವನ್ನು ಹೊಂದಿದೆ. ನಿರ್ದಿಷ್ಟ ಅಧ್ಯಾಯದ ವಿಷಯವನ್ನು ಅರ್ಥಮಾಡಿಕೊಳ್ಳಲು ಇದು ಶಿಕ್ಷಕರಿಗೆ ಸಹಾಯ ಮಾಡುತ್ತದೆ.

- ಮಕ್ಕಳು ಮೋಜು ಮಾಡುತ್ತಾ ಕಲಿಯಲು ಅನುವಾಗುವಂತೆ ಪುಸ್ತಕವು ಸಾಕಷ್ಟು ಅವಕಾಶವನ್ನು ಒದಗಿಸುತ್ತದೆ.

- ಸ್ಥಳೀಯ ಭಾಷೆಯನ್ನು ತರಗತಿಯೊಳಗೆ ಬಳಸಲು ಪುಸ್ತಕವು ಅವಕಾಶವನ್ನು ನೀಡುತ್ತದೆ.

**ಕೊನೆಯ ಮಾತು**

ಈ ಪುಸ್ತಕವನ್ನು ನಾನು ನಮ್ಮ ಶಾಲೆಯಲ್ಲಿ ಮೊದಲ ಬಾರಿಗೆ ಬಳಸಿದ್ದೇನೆ ಮತ್ತು ಇವು ನನ್ನ ಅನಿಸಿಕೆಗಳಾಗಿವೆ.

ಪುಸ್ತಕವನ್ನು ಎನ್‌ಸಿಇಆರ್‌ಟಿ ಪ್ರಕಟಿಸಿರುವುದರಿಂದ, ಇದು 7ನೇ ತರಗತಿಯ ಇಂಗ್ಲಿಷ್ ಪಠ್ಯ ಪುಸ್ತಕದ ಕೆಲವು ನಿಗದಿತ ನಿಯತಾಂಕಗಳನ್ನು ಒಳಗೊಳ್ಳಲು ಪ್ರಯತ್ನಿಸುತ್ತದೆ. ಅದೇನೇ ಇದ್ದರೂ ಈ ಪುಸ್ತಕವನ್ನು ಭಾರತದಾದ್ಯಂತ ಶಾಲೆಗಳಲ್ಲಿ ಬಳಸುವಾಗ ವೈವಿಧ್ಯದ ಕಾರಣದಿಂದಾಗಿ ಖಂಡಿತವಾಗಿಯೂ ಅದು ಸಂದರ್ಭೋಚಿತ ವಿಷಯದ ಕೊರತೆಯನ್ನು ಅನುಭವಿಸುತ್ತದೆ.

ಇಡೀ ದೇಶದ ಸಂದರ್ಭಕ್ಕೆ ಅನುಗುಣವಾಗಿ ವಿಷಯವನ್ನು ಒಳಗೊಂಡಿರುವ ಒಂದು ಪುಸ್ತಕವನ್ನು ತರುವುದು ಕಷ್ಟಸಾಧ್ಯವಾದರೂ ಸಹ ಪುಸ್ತಕದಲ್ಲಿ ಬರುವ ವಿದೇಶಿ ಬರಹಗಾರರ ಪ್ರಾಬಲ್ಯವನ್ನು ತಪ್ಪಿಸಲು ಹೆಚ್ಚು ಹೆಚ್ಚು ಭಾರತೀಯ ಬರಹಗಾರರನ್ನು ಸೇರಿಸುವ ಆವಶ್ಯಕತೆಯನ್ನಾದರೂ ಎತ್ತಿ ತೋರಿಸುತ್ತದೆ.

ಇತರ ವಿಷಯಗಳಲ್ಲಿ ಪುಸ್ತಕವು ಸಮತೋಲಿತವಾಗಿದೆ. ಏಕೆಂದರೆ ಇದು ಕೆಲವು ಮೋಜಿನ ಚಟುವಟಿಕೆಗಳೊಂದಿಗೆ ಕಲಿಸಲು ಶಿಕ್ಷಕರಿಗೆ ಸಾಕಷ್ಟು ಅವಕಾಶವನ್ನು ನೀಡುತ್ತದೆ ಮತ್ತು ಇದರೊಂದಿಗೆ ಮಕ್ಕಳ ಸೃಜನಶೀಲತೆಯನ್ನು ವ್ಯಕ್ತಪಡಿಸುವ ಅವಕಾಶಗಳೂ ಇವೆ. ಇನ್ನೂ ಕಡಮೆ ಮಟ್ಟದ ಕ್ಲಿಷ್ಟತೆ ಇರುವ ಪುಸ್ತಕಗಳು ಇದ್ದಿದ್ದರೆ ಮಕ್ಕಳಿಗೆ ಎನ್‌ಸಿಇಆರ್‌ಟಿ ಪುಸ್ತಕಗಳನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಲು ಸಾಧ್ಯವಾಗುತ್ತಿತ್ತು ಎಂಬುದು ನನ್ನ ಅಭಿಪ್ರಾಯ.

ಇನ್ನೊಂದು ಸಲಹೆಯೆಂದರೆ: ಈ ಪುಸ್ತಕವನ್ನು ಹೆಚ್ಚು ಉಪಯುಕ್ತವಾಗಿಸಲು ಎನ್‌ಸಿಇಆರ್‌ಟಿ ತಮ್ಮ ಪ್ರದೇಶಗಳಿಗೆ ಸಂಬಂಧಿಸಿದ ಸಂದರ್ಭವನ್ನು ಹೊಂದಿರುವ ಕೆಲವು ಪಾಠಗಳನ್ನು ಸೇರಿಸುವ ನಿಟ್ಟಿನಲ್ಲಿ ಆಲೋಚನೆ ಮಾಡಬೇಕು. ಆಗ ಈ ಪುಸ್ತಕವು ಕಲಿಕಾರ್ಥಿಗಳಿಗೆ ಮತ್ತು ಶಿಕ್ಷಕರಿಗೆ ವರದಾನವಾಗುತ್ತದೆ.

***

**ರವಿ ಪ್ರತಾಪ್ ಸಿಂಗ್:** ಇವರು ಕಳೆದ ಏಳು ವರ್ಷಗಳಿಂದ ಮಾಲ್ಟಿಯಲ್ಲಿರುವ ಅಜೀಂ ಪ್ರೇಮ್ ಜಿ ಶಾಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. 7 ಮತ್ತು 8 ನೇ ತರಗತಿಯ ಮಕ್ಕಳಿಗೆ ಇಂಗ್ಲಿಷ್ ಬೋಧಿಸುತ್ತಿದ್ದಾರೆ. ಅವರನ್ನು ravi.singh@azimpremjifoundation.org ಮೂಲಕ ಸಂಪರ್ಕಿಸಬಹುದು.

ಅನುವಾದ: ಪರಿಶೀಲನೆ: ನಾಗಮಣಿ ಎಸ್. ಎನ್.